# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 160
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ
ಉತ್ತರಿಸುವ ದಿನಾಂಕ : 14-12-2021
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಹಾಗೂ ಸಣ್ಣ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ದಿಮೆ ಸಚಿವರು.

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ. | ಪೌರಾಡಳಿತ ಇಲಾಖೆಯಲ್ಲಿ ಒಟ್ಟು ಮಂಜೂರಾದ ಹುದ್ದೆಗಳೆಷ್ಟು; (ವಿವರ ನೀಡುವುದು) | ಪೌರಾಡಳಿತ ಇಲಾಖೆಯ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಒಟ್ಟು 35627 ಹುದ್ದೆಗಳು ಮಂಜೂರಾಗಿರುತ್ತದೆ. ವಿವರ ಅನುಬಂಧದಲ್ಲಿ ಲಗತ್ತಿಸಿದೆ. |
| ಆ. | ಇದರಲ್ಲಿ ಖಾಲಿಯಿರುವ ಹುದ್ದೆಗಳೆಷ್ಟು; | ಈ ಪೈಕಿ 12581 ಹುದ್ದೆಗಳು ಖಾಲಿ ಇರುತ್ತದೆ. |
| ಇ. | ಈ ಹುದ್ದೆಗಳು ಎಂದಿನಿಂದ ಖಾಲಿ ಇವೆ; | ರಾಜ್ಯದ 315 ನಗರಸ್ಥಳೀಯ ಸಂಸ್ಥೆಗಳಲ್ಲಿ ನಿವೃತ್ತಿ, ವರ್ಗಾವಣೆ, ಮರಣ, ಪದೋನ್ನತಿ, ರಾಜೀನಾಮೆ ಹಾಗೂ ಇತರೆ ಕಾರಣಗಳಿಂದ ಹುದ್ದೆಗಳು ಖಾಲಿಯಾಗುತ್ತದೆ. |
| ಈ. | ಈ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು? (ವಿವರ ನೀಡುವುದು). | ಕರ್ನಾಟಕ ಲೋಕಸೇವಾ ಆಯೋಗದಿಂದ ಗ್ರೂಪ್ ಬಿ ಮತ್ತು ಗ್ರೂಪ್ ಸಿ ವೃಂದದ (ಹೈದ್ರಾಬಾದ್ ಕರ್ನಾಟಕ ಪ್ರದೇಶದ ಒಳಗೊಂಡು) 1104 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿ ಸ್ವೀಕೃತವಾಗಿದ್ದು, ಅದರಲ್ಲಿ ಒಟ್ಟು 769 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗಿ, 721 ಅಭ್ಯರ್ಥಿಗಳು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಪ್ರಸ್ತುತ ನಿರ್ದೇಶನಾಲಯದಲ್ಲಿ ವಿವಿಧ ವೃಂದದ ಒಟ್ಟು 69 ಹುದ್ದೆಗಳ ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. ಉಳಿದಂತೆ 519 ಹುದ್ದೆಗಳ ಆಯ್ಕೆ ಪಟ್ಟಿ ಕರ್ನಾಟಕ ಲೋಕಸೇವಾ ಆಯೋಗದಿಂದ ಸ್ವೀಕೃತವಾಗ ಬೇಕಿರುತ್ತದೆ. ಉಳಿದಂತೆ ನೇರನೇಮಕಾತಿಯಡಿ ಖಾಲಿ ಇರುವ ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಮೂಲ ವೃಂದದ 293 ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯ ಸಹಮತಿ ಪಡೆಯಲು ಕ್ರಮವಹಿಸಲಾಗುತ್ತಿದೆ.<br><br>ಇದಲ್ಲದೆ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಮಹಾನಗರ ಪಾಲಿಕೆಯಲ್ಲಿನ 72 ಹುದ್ದೆಗಳು ಹಾಗೂ ನಗರಸ್ಥಳೀಯ ಸಂಸ್ಥೆಗಳಲ್ಲಿನ 24 ಹುದ್ದೆಗಳು ಸೇರಿ ಒಟ್ಟು 96 ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡಲು ನಿಯಮಾನುಸಾರ ಪರಿಶೀಲಿಸಲಾಗುತ್ತಿದೆ. |

| | | |
|---|---|---|
| | | ಮುಂದುವರೆದು, ಮುಂಬಡ್ತಿ ಖೋಟಾದಡಿಯಲ್ಲಿ ಖಾಲಿ ಇರುವ ಗ್ರೂಪ್ "ಬಿ" ಮತ್ತು "ಸಿ" ವೃಂದದ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ. ಸರ್ಕಾರದ ಆದೇಶಗಳನುಸಾರ ಕೆಲವು ಹುದ್ದೆಗಳ ಸೇವೆಯನ್ನು ಹೊರಗುತ್ತಿಗೆ ಮತ್ತು ನೇರಪಾವತಿಯಡಿ ಪಡೆಯಲು ಅವಕಾಶವಿದ್ದು, ಅದರಂತೆ ಹೊರಗುತ್ತಿಗೆ ಮತ್ತು ನೇರ ನೇಮಕಾತಿಯಡಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: ನಅಇ 41 ಎಲ್‌ಸಿಕ್ಯೂ 2021**

(ಎನ್.ನಾಗರಾಜು ಎಂ.ಟಿ.ಬಿ.)
ಮಾನ್ಯ ಪೌರಾಡಳಿತ ಹಾಗೂ ಸಣ್ಣ ಕೈಗಾರಿಕೆ ಮತ್ತು
ಸಾರ್ವಜನಿಕ ಉದ್ದಿಮೆ ಸಚಿವರು